## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಪಿ.ಆರ್.ರಮೇಶ್ (ನಾಮನಿರ್ದೇಶನ ಹೊಂದಿದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1947** |
| ಉತ್ತರಿಸಬೇಕಾದ ದಿನಾಂಕ | : | 16.03.2022 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯ ಶಾಂತಿನಗರ ವಿಧಾನ ಸಭಾ ಕ್ಷೇತ್ರದ ಕೆ.ಹೆಚ್.ರಸ್ತೆ, ಅಕ್ಕಿತಿಮ್ಮನಹಳ್ಳಿ ಗ್ರಾಮಕ್ಕೆ ಒಳಪಡುವ ಸಿ.ಟಿ.ಎಸ್- 1106, 1061,1060 ಮತ್ತು 1059 ಸಂಖ್ಯೆಯ ನಿವೇಶನಗಳ ಒಟ್ಟು ವಿಸ್ತೀರ್ಣ 2733.6 ಚ.ಮೀ ಕೊಳಚೆ ಪ್ರದೇಶವೆಂದು ಘೋಷಿಸಲಾಗಿದೆಯೇ ; ಸದರಿ ಪ್ರದೇಶದಲ್ಲಿ ಯಾವ ಮೂಲಭೂತ ಸೌಕರ್ಯಗಳಿಲ್ಲದೆ ಎಷ್ಟು ಗುಡಿಸಲುಗಳು ಸರ್ಕಾರದ ಪ್ರಾಥಮಿಕ ಅಧಿಸೂಚನೆಯ ಸಂದರ್ಭ ನಿರ್ಮಾಣವಾಗಿದ್ದವು ; ಪ್ರಸ್ತುತ ಎಷ್ಟು ಗುಡಿಸಲುಗಳು ಅಸ್ತಿತ್ವದಲ್ಲಿವೆ ; (ಸಂಬಂಧಿಸಿದ GIS ಮಾಹಿತಿ ನೀಡುವುದು) ಮತ್ತು ಸರ್ಕಾರದ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯ ಕಡತದ ಸಂಖ್ಯೆ :ಕೆ.ಎಸ್.ಎ/ಸಿಆರ್/28/ 16-17 ಸಂಬಂಧಿಸಿದಂತೆ ಪ್ರಾಥಮಿಕ ಮತ್ತು ಅಂತಿಮ ಅಧಿಸೂಚನೆಯ ಎಲ್ಲಾ ಅಧಿಸೂಚನೆಯ ಪ್ರತಿಗಳನ್ನು ಒದಗಿಸುವುದು) | ಬೆಂಗಳೂರು ನಗರದ ಶಾಂತಿನಗರ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಕೆ.ಹೆಚ್.ರಸ್ತೆಯ ಖಾಸಗಿ ಜಮೀನಿನಲ್ಲಿರುವ ಕೊಳಚೆ ಪ್ರದೇಶವನ್ನು ಅಧಿಸೂಚನೆ ಸಂಖ್ಯೆ: ಕೆಎಸ್ಎ/ಸಿಆರ್/28/2016-17, ದಿನಾಂಕ:08-02-2018 ರಂದು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿಮತ್ತುನಿರ್ಮೂಲನೆ) ಕಾಯಿದೆ 1973 ರ ಕಲಂ-3 ರಡಿ ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರು ಅಧಿಸೂಚನೆ ಹೊರಡಿಸಿರುತ್ತಾರೆ. ಅಧಿಸೂಚನೆಯಂತೆ ಸದರಿ ಕೊಳಚೆ ಪ್ರದೇಶವು ಸಿ.ಟಿ.ಎಸ್ ನಂ.1106, 1061, 1060 ಮತ್ತು 1059 ರಲ್ಲಿ ಒಟ್ಟು 2733.60 ಚ.ಮೀ (0-27 ಗುಂಟೆ) ವಿಸ್ತೀರ್ಣದಿಂದ ಕೂಡಿದ್ದು, ಖಾಸಗಿ ಮಾಲೀಕತ್ವದಲ್ಲಿರುತ್ತದೆ. ಪ್ರಾಥಮಿಕ ಅಧಿಸೂಚನೆ ಹೊರಡಿಸುವ ಸಮಯದಲ್ಲಿ ಈ ಪ್ರದೇಶದಲ್ಲಿ ಒಟ್ಟು 169 ಗುಡಿಸಲುಗಳಿದ್ದು, ಸದರಿ ಗುಡಿಸಲುಗಳು ಪ್ರಸ್ತುತ ಮುಂದುವರಿದಿದ್ದು, ಇತ್ತೀಚಿನ ಸರ್ವೆ ಕಾರ್ಯ ಮಾನ್ಯ ನ್ಯಾಯಾಲಯದ ಪ್ರತಿ ಬಂಧಕಾಜ್ಞೆ ಇರುವುದರಿಂದ ಸರ್ವೆ ಕಾರ್ಯ ಸ್ಥಗಿತಗೊಂಡಿರುತ್ತದೆ.<br><br>ಸದರಿ ಪ್ರದೇಶದ ಸ್ವತ್ತಿಗೆ ಸಂಬಂಧಿಸಿದಂತೆ ಮಾನ್ಯ ಸಿವಿಲ್ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:1121/2021 ರಂತೆ ಪ್ರಕರಣ ದಾಖಲಾಗಿದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯಾಲಯದಲ್ಲಿ ತಾತ್ಕಾಲಿಕ ಪ್ರತಿ ಬಂಧಕಾಜ್ಞೆ ಇರುವುದರಿಂದ ಪ್ರಸ್ತುತ ವಾಸವಿರುವ ಕೊಳಗೇರಿ ನಿವಾಸಿಗಳ ಸಮೀಕ್ಷೆ ಕಾರ್ಯ ಕೈಗೊಂಡಿರುವುದಿಲ್ಲ. ಸದರಿ ಕೊಳಚೆ ಪ್ರದೇಶದ ಪ್ರಾಥಮಿಕ ಮತ್ತು ಅಂತಿಮ ಅಧಿಸೂಚನೆ ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿದೆ. |
| ಆ) | ಸರ್ಕಾರದ ಅಧಿಸೂಚನೆಯ ಪ್ರಕಾರ ಅಕ್ಕಿತಿಮ್ಮನಹಳ್ಳಿ ಗ್ರಾಮಕ್ಕೆ ಒಳಪಡುವ ನಗರ ಭೂ ಮಾಪನ ಇಲಾಖೆಯ ಸಿ.ಟಿ.ಎಸ್.- 1106, 1061,1060 | ಅಕ್ಕಿ ತಿಮ್ಮನಹಳ್ಳಿ ಗ್ರಾಮಕ್ಕೆ ಒಳಪಡುವ ಸಿ.ಟಿ.ಎಸ್ 1106, 1061, 1060 ಮತ್ತು 1059 ರಲ್ಲಿನ ಕೊಳಚೆ ಪ್ರದೇಶಕ್ಕೆ ಸಂಬಂಧಿಸಿದಂತೆ ಮಾಲೀಕರ ವಿವರ ನಗರ ಮಾಪನ |

| | | |
|---|---|---|
| | ಮತ್ತು 1059 ಸಂಖ್ಯೆಯ ನಿವೇಶನಗಳು ಯಾವುವು; (ಸಂಬಂಧಿಸಿದ ಮಾಲೀಕರ ಹೆಸರುಗಳನ್ನು ಮತ್ತು ವಿವರಗಳನ್ನು ಒದಗಿಸುವುದು) | ದಾಖಲೆಯಲ್ಲಿ ಎ.ಕುಕಲಿಂಗಮ್ಮ ಮತ್ತು ಅಣ್ಣಯ್ಯಪ್ಪ ಎಂದು ದಾಖಲಾಗಿರುತ್ತದೆ. |
| ಇ) | ಸದರಿ ಪ್ರದೇಶಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಗಳ ಆದೇಶಗಳು ಇವೆಯೇ; (ವಿವರಗಳನ್ನು ಒದಗಿಸುವುದು) | ಕರ್ನಾಟಕ ಕೊಳಚೆ ಪ್ರದೇಶಗಳ(ಅಭಿವೃದ್ಧಿ ಮತ್ತು ನಿರ್ಮೂಲನೆ) ಅಧಿನಿಯಮ 1973 ರ ಕಲಂ 3 ರಡಿಯಲ್ಲಿ ಸಿ.ಟಿ.ಎಸ್ ನಂ. 1106, 1061, 1059 ಅನ್ನು ಹೊಂದಿರುವ ಕೆ.ಹೆಚ್. ರಸ್ತೆ (ಡಬಲ್ ರಸ್ತೆ) ಅಕ್ಕಿತಿಮ್ಮನಹಳ್ಳಿ (ಶಾಂತಿ ನಗರ ಸ್ಲಂ) ನಲ್ಲಿರುವ ಖಾಸಗಿ ಜಮೀನಿನಲ್ಲಿರುವ 27 ಗುಂಟೆ ಪ್ರದೇಶವನ್ನು ಅಂತಿಮವಾಗಿ ಕೊಳಚೆ ಪ್ರದೇಶವೆಂದು ಘೋಷಿಸಿ, ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರು ಸಂಖ್ಯೆ:KSA/CR/28/16-17, ದಿನಾಂಕ:08.02.2018 ರ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸದರಿ ಅಧಿಸೂಚನೆಯನ್ನು ರದ್ದುಗೊಳಿಸುವಂತೆ ಡಾ: ಸಂಜೀವ್ ಕುನ್ನತೂರ್, ಮೈಸೂರು ಇವರು ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973 ರ ಸೆಕ್ಷನ್ 59 ರಡಿ ಮೇಲ್ಮನವಿ ಸಂಖ್ಯೆ: 03/2020 ಅನ್ನು ಸಲ್ಲಿಸಿರುತ್ತಾರೆ. ಸದರಿ ಮೇಲ್ಮನವಿಯು ಬಾಕಿ ಇರುತ್ತದೆ.<br><br>ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಿಸಿರುವ MFA ಸಂಖ್ಯೆ:2865/2021 ರ ಪ್ರಕರಣವು ಬಾಕಿ ಇರುತ್ತದೆ.<br><br>ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಮೆ: ಅಭಯ ಎಸ್ಟೇಟ್, ಹೈದರಾಬಾದ್ ರವರು ಜಿಲ್ಲಾಧಿಕಾರಿಗಳು ಹೊರಡಿಸಿರುವ ದಿನಾಂಕ:08.02.2018 ರ ಅಂತಿಮ ಅಧಿಸೂಚನೆಯನ್ನು ರದ್ದುಪಡಿಸುವಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾವೆ ಸಂಖ್ಯೆ:14529/2021 ದಾಖಲಿಸಿದ್ದು, ಸದರಿ ಪ್ರಕರಣವು ಬಾಕಿ ಇರುತ್ತದೆ.<br><br>ಈ ಪ್ರಕರಣದಲ್ಲಿ ಮಾನ್ಯ ಸಿಟಿ ಸಿವಿಲ್ ನ್ಯಾಯಾಲಯದಲ್ಲಿ ಮತ್ತು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಕರಣಗಳು ಬಾಕಿ ಇದ್ದು, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಸದರಿಯವರು ಸಲ್ಲಿಸಿರುವ ಮೇಲ್ಮನವಿಯು ಪರಿಶೀಲನೆಯಲ್ಲಿರುತ್ತದೆ. |
| ಈ) | ಸದರಿ ನ್ಯಾಯಾಲಯಗಳ ಆದೇಶಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿಯಿಂದ ಮತ್ತು ಸರ್ಕಾರದಿಂದ ಯಾವ ಕ್ರಮಗಳನ್ನು ಕೈಗೊಂಡಿದೆ? (ಕೈಗೊಂಡ ಕ್ರಮಗಳ ಪ್ರಸ್ತುತ ಸ್ಥಿತಿಗತಿಗಳ ವಿವರಗಳನ್ನು ನೀಡುವುದು) | |

ಸಂಖ್ಯೆ :ವಇ 48 ಎಸ್‌ಬಿಎಂ 2022

(ವಿ. ಸೋಮಣ್ಣ)
ವಸತಿ ಮತ್ತು ಮೂಲಸೌಲಭ್ಯ
ಅಭಿವೃದ್ಧಿ ಸಚಿವರು